# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಹದಿನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 19ನೇ ಜೂನ್, 2017
(ಸಮಯ: ಬೆಳಿಗ್ಗೆ 10.30 ಗಂಟೆಗೆ)

----

### 1. ವರದಿಯನ್ನೊಪ್ಪಿಸುವುದು

**ಡಾ|| ಎ.ಬಿ. ಮಾಲಕರೆಡ್ಡಿ** (ಅಧ್ಯಕ್ಷರು, ವಿಧಾನ ಮಂಡಲದ ಸಾರ್ವಜನಿಕ ಉದ್ಯಮಗಳ ಸಮಿತಿ) ಅವರು ವಿಧಾನ ಮಂಡಲದ ಸಾರ್ವಜನಿಕ ಉದ್ಯಮಗಳ ಸಮಿತಿಯ 132ನೇ ವರದಿಯನ್ನೊಪ್ಪಿಸುವುದು.

### 2. ವಿತ್ತೀಯ ಕಾರ್ಯಕಲಾಪಗಳು

ಅ) 2017-18ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮೇಲೆ ಮುಂದುವರೆದ ಚರ್ಚೆ ಹಾಗೂ ಸರ್ಕಾರದ ಉತ್ತರ.

| **ಬೇಡಿಕೆ ಸಂಖ್ಯೆ** | **ಬೇಡಿಕೆಯ ಹೆಸರು** |
|---|---|
| 01 | ಕೃಷಿ ಮತ್ತು ತೋಟಗಾರಿಕೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| 05 | ಒಳಾಡಳಿತ ಮತ್ತು ಸಾರಿಗೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ |
| 08 | ಅರಣ್ಯ, ಜೀವಿ ಶಾಸ್ತ್ರ ಮತ್ತು ಪರಿಸರ |
| 09 | ಸಹಕಾರ |
| 10 | ಸಮಾಜ ಕಲ್ಯಾಣ |

. . . 2

| | |
|---|---|
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 14 | ಕಂದಾಯ |
| 15 | ಮಾಹಿತಿ ತಂತ್ರಜ್ಞಾನ |
| 16 | ವಸತಿ |
| 17 | ಶಿಕ್ಷಣ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 19 | ನಗರಾಭಿವೃದ್ಧಿ |
| 20 | ಲೋಕೋಪಯೋಗಿ |
| 21 | ಜಲ ಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 23 | ಕಾರ್ಮಿಕ ಮತ್ತು ಕೌಶಲ್ಯ ಅಭಿವೃದ್ಧಿ |
| 24 | ಇಂಧನ |
| 25 | ಕನ್ನಡ ಮತ್ತು ಸಂಸ್ಕೃತಿ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |

ಅ) 2017-18ನೇ ಸಾಲಿನ ಪೂರಕ ಅಂದಾಜುಗಳ (ಮೊದಲನೇ ಕಂತು) ಮೇಲೆ ಚರ್ಚೆ.

## 3. ಶಾಸನ ರಚನೆ

### I. ವಿಧೇಯಕಗಳನ್ನು ಮಂಡಿಸುವುದು

**1. ಶ್ರೀ ಹೆಚ್. ಆಂಜನೇಯ(ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ (ಯೋಜನೆ ರೂಪಿಸುವುದು, ಆರ್ಥಿಕ ಸಂಪನ್ಮೂಲಗಳ ಹಂಚಿಕೆ ಮತ್ತು ಬಳಕೆ) (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು.

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

. . . 3

**2. ಶ್ರೀ ಕಾಗೋಡು ತಿಮ್ಮಪ್ಪ (ಕಂದಾಯ ಸಚಿವರು) ಅವರು :-**

ಅ) 2017ನೇ ಸಾಲಿನ ರೋರಿಕ್ ಮತ್ತು ದೇವಿಕಾರಾಣಿ ರೋರಿಕ್ ಎಸ್ಟೇಟ್ (ಆರ್ಜನೆ ಮತ್ತು ವರ್ಗಾವಣೆ) (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು.

ಇ) ಹಾಗೂ ವಿಧೇಯಕವನ್ನು ಮಂಡಿಸುವುದು.

## II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**1. ಶ್ರೀ ಕೆ.ಆರ್. ರಮೇಶ್ ಕುಮಾರ್ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ವೈದ್ಯಾಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2. ಶ್ರೀ ಬಸವರಾಜ ರಾಯರಡ್ಡಿ (ಉನ್ನತ ಶಿಕ್ಷಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ರಾಜ್ಯ ಡಾ|| ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು

**3. ಶ್ರೀ ಬಸವರಾಜ ರಾಯರಡ್ಡಿ (ಉನ್ನತ ಶಿಕ್ಷಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು

**4. ಶ್ರೀ ಬಸವರಾಜ ರಾಯರಡ್ಡಿ (ಉನ್ನತ ಶಿಕ್ಷಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು

**5. ಡಾ॥ ಶರಣಪ್ರಕಾಶ ಆರ್. ಪಾಟೀಲ್ (ವೈದ್ಯಕೀಯ ಶಿಕ್ಷಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ವೈದ್ಯಕೀಯ ಕೋರ್ಸುಗಳನ್ನು ಪೂರ್ಣಗೊಳಿಸಿದ ಅಭ್ಯರ್ಥಿಗಳ ಕಡ್ಡಾಯ ಸೇವಾ ತರಬೇತಿ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**6. ಶ್ರೀ ಕೃಷ್ಣ ಬೈರೇಗೌಡ (ಕೃಷಿ ಸಚಿವರು) ಅವರು :-**

ಅ) 2016ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಕೃಷಿ ಇಲಾಖೆಯ ಅಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**7. ಶ್ರೀ ಹೆಚ್. ಆಂಜನೇಯ(ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ (ಯೋಜನೆ ರೂಪಿಸುವುದು, ಆರ್ಥಿಕ ಸಂಪನ್ಮೂಲಗಳ ಹಂಚಿಕೆ ಮತ್ತು ಬಳಕೆ) (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**8. ಶ್ರೀ ಕಾಗೋಡು ತಿಮ್ಮಪ್ಪ (ಕಂದಾಯ ಸಚಿವರು) ಅವರು :-**

ಅ) 2017ನೇ ಸಾಲಿನ ರೋರಿಕ್ ಮತ್ತು ದೇವಿಕಾರಾಣಿ ರೋರಿಕ್ ಎಸ್ಟೇಟ್ (ಆರ್ಜನೆ ಮತ್ತು ವರ್ಗಾವಣೆ) (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು.

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 4. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. **ಶ್ರೀಯುತರುಗಳಾದ ಜಗದೀಶ್ ಶೆಟ್ಟರ್, ಎಂ.ಪಿ. ಅಪ್ಪಚ್ಚು (ರಂಜನ್). ಎಸ್. ಸುರೇಶ್ ಕುಮಾರ್, ಎಂ. ಸತೀಶ್ ರೆಡ್ಡಿ, ಡಿ.ಎನ್. ಜೀವರಾಜ್ ಹಾಗೂ ಇತರರು** ಇವರುಗಳು – ರಾಜ್ಯದಲ್ಲಿ ಅಕ್ರಮ ಮರಳುಗಾರಿಕೆ ಅವ್ಯಾಹತವಾಗಿ ನಡೆಯುತ್ತಿದ್ದು, ಇದರ ಹಿಂದೆ ಭೂಮಾಫಿಯ ಕೈವಾಡವಿರಬಹುದಾದ ವಿಷಯದ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

2. **ಶ್ರೀಯುತರುಗಳಾದ ಕೆ.ಎಸ್. ಪುಟ್ಟಣ್ಣಯ್ಯ, ಗುರುಪಾಟೀಲ ಶಿರವಾಳ, ಬಿ.ಎನ್.ವಿಜಯ್‌ಕುಮಾರ್ ಮತ್ತು ದೊಡ್ಡನಗೌಡ ಹೆಚ್. ಪಾಟೀಲ** ಇವರುಗಳು – ಪಾಂಡವಪುರ ತಾಲ್ಲೂಕು ಬೇಬಿ ಬೆಟ್ಟದ ಸುತ್ತಮುತ್ತ ಅವ್ಯಾಹತವಾಗಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆಯಲ್ಲಿ ಶಾಮೀಲಾಗಿರುವವರೆಲ್ಲರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

3. **ಶ್ರೀಯುತರುಗಳಾದ ಲಕ್ಷ್ಮಣ ಸಂಗಪ್ಪ ಸವದಿ, ಡಿ.ಎನ್. ಜೀವರಾಜ್ ಮತ್ತು** ಸಿ.ಟಿ. ರವಿ ಇವರುಗಳು – ಶಿವಮೊಗ್ಗ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಗರ ಶಾಖೆಯಲ್ಲಿ ನಡೆದಿರುವ ಅಕ್ರಮ ಹಾಗೂ ಅವ್ಯವಹಾರಗಳ ಪ್ರಕರಣಗಳನ್ನು ಸಿ.ಬಿ.ಐ.ಗೆ ವಹಿಸುವುದು ಹಾಗೂ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

4. **ಶ್ರೀಯುತರುಗಳಾದ ಲಕ್ಷ್ಮಣ ಸಂಗಪ್ಪ ಸವದಿ, ಡಿ.ಎನ್. ಜೀವರಾಜ್ ಮತ್ತು** ಸಿ.ಟಿ. ರವಿ ಇವರುಗಳು – ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಚುನಾವಣೆಯಲ್ಲಿ ಶ್ರೀ ಎ. ವಸಂತಕುಮಾರ್ ಇವರು ಸಂವಿಧಾನಬಾಹಿರವಾಗಿ ಹಾಗೂ ಸಹಕಾರ ಕಾಯ್ದೆಯನ್ನು ಉಲ್ಲಂಘಿಸಿ ಆಯ್ಕೆಯಾಗಿರುವ ಕುರಿತು ನೀಡಿರುವ ಸೂಚನೆಯ ಮೇಲೆ ಚರ್ಚೆ.

5. **ಶ್ರೀಯುತರುಗಳಾದ ಬಿ.ಆರ್. ಪಾಟೀಲ್, ಹೆಚ್.ಕೆ. ಕುಮಾರಸ್ವಾಮಿ ಮತ್ತು ಕಿಮ್ಮನೆ ರತ್ನಾಕರ್** ಇವರುಗಳು – ಗ್ರಾಮೀಣ ಭಾಗದ ಮಕ್ಕಳಿಗೆ ವೃತ್ತಿ ಶಿಕ್ಷಣದಲ್ಲಿ ಹಾಗೂ ಸರ್ಕಾರಿ ಸೇವೆಯಲ್ಲಿ ಸಮರ್ಪಕ ಅವಕಾಶ ಸಿಗದೆ ಅನ್ಯಾಯವಾಗುತ್ತಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

6. **ಶ್ರೀಯುತರುಗಳಾದ ಬಿ.ಆರ್. ಯಾವಗಲ್, ಎನ್.ಹೆಚ್. ಕೋನರಡ್ಡಿ ಮತ್ತು ದೊಡ್ಡಮನಿ ರಾಮಕೃಷ್ಣ ಶಿದ್ಲಿಂಗಪ್ಪ** ಇವರುಗಳು – ಮಹದಾಯಿ ನದಿ ನೀರಿನ ಹಂಚಿಕೆ ಬಗ್ಗೆ ತುರ್ತು ಕ್ರಮ ಕೈಗೊಳ್ಳುವ ಕುರಿತು ನೀಡಿರುವ ಸೂಚನೆಯ ಮೇಲೆ ಚರ್ಚೆ.

. . . 6

7. **ಶ್ರೀಯುತರುಗಳಾದ ಎನ್.ಹೆಚ್. ಕೋನರಡ್ಡಿ, ಬಿ.ಬಿ.ನಿಂಗಯ್ಯ, ಮಧುಬಂಗಾರಪ್ಪ, ಕೆ.ಎಂ.ಶಿವಲಿಂಗೇಗೌಡ, ಹೆಚ್.ಕೆ. ಕುಮಾರಸ್ವಾಮಿ ಮತ್ತು ಹೆಚ್. ಎಸ್. ಶಿವಶಂಕರ್** ಇವರುಗಳು – ರಾಜ್ಯ ರೈತರ ಸಾಲವನ್ನು ಸಂಪೂರ್ಣ ಮನ್ನಾ ಮಾಡುವಂತೆ ರೈತರು ಹೋರಾಟ ನಡೆಸುತ್ತಿದ್ದು ಸರ್ಕಾರವು ಕೂಡಲೇ ರೈತರ ಸಾಲ ಮನ್ನಾ ಮಾಡುವಂತೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

8. **ಶ್ರೀಯುತರುಗಳಾದ ಬಿ.ಬಿ. ನಿಂಗಯ್ಯ, ಡಿ.ಎನ್. ಜೀವರಾಜ್, ಹೆಚ್.ಕೆ. ಕುಮಾರಸ್ವಾಮಿ ಮತ್ತು ಎಂ.ಪಿ. ಅಪ್ಪಚ್ಚು (ರಂಜನ್)** ಇವರುಗಳು – ಗ್ರಾಮೀಣ ಪ್ರದೇಶಗಳಲ್ಲಿ ಸರ್ಕಾರಿ ಜಮೀನಿನಲ್ಲಿ ಜೀವನೋಪಯಕ್ಕಾಗಿ ಕೃಷಿ ಮಾಡಿಕೊಂಡು ಜೀವನ ಸಾಗಿಸುತ್ತಿರುವ ಬಡ ರೈತರಿಗೆ ಕಂದಾಯ ಇಲಾಖೆಯ ಕಾಯ್ದೆ 192ಎ ಮತ್ತು 192 ಬಿ ಯಿಂದ ಅನ್ಯಾಯವಾಗುತ್ತಿರುವುದರಿಂದ ಅಗತ್ಯ ತಿದ್ದುಪಡಿ ತರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

9. **ಶ್ರೀಯುತರುಗಳಾದ ಬಿ.ಆರ್. ಪಾಟೀಲ್, ಕೆ.ಎಸ್. ಪುಟ್ಟಣ್ಣಯ್ಯ, ಹೆಚ್. ಕೆ. ಕುಮಾರಸ್ವಾಮಿ ಮತ್ತು ಕಿಮ್ಮನೆ ರತ್ನಾಕರ್** ಇವರುಗಳು – ಸರಕಾರಿ ಸೇವೆಯಲ್ಲಿ ವಯೋಮಿತಿ ನಂತರ ನಿವೃತ್ತರಾದವರಿಗೆ ಪಿಂಚಣಿ ವ್ಯವಸ್ಥೆ ಇದ್ದು ಅದೇ ತರಹ ವಯೋಮಿತಿ ಮೀರಿ ಕಷ್ಟದಲ್ಲಿರುವ ರೈತರಿಗೂ ಪಿಂಚಣಿ ನೀಡುವ ಕುರಿತು ನೀಡಿರುವ ಸೂಚನೆಯ ಮೇಲೆ ಚರ್ಚೆ.

10. **ಶ್ರೀಯುತರುಗಳಾದ ಅರವಿಂದ ಚಂದ್ರಕಾಂತ ಬೆಲ್ಲದ, ಆನಂದ ಮಾಮನಿ ಮತ್ತು ಡಾ|| ಅಶ್ವಥ್‌ನಾರಾಯಣ ಸಿ.ಎನ್** ಇವರು – ಹುಬ್ಬಳ್ಳಿ – ಧಾರವಾಡ ನಡುವಿನ BRTS ಮತ್ತು ಬಸ್ ನಿಲ್ದಾಣಗಳ ಕಾಮಗಾರಿಗಳು ಮಂದಗತಿಯಿಂದ ಸಾಗುತ್ತಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

11. **ಶ್ರೀಯುತರುಗಳಾದ ಎಸ್. ಸುರೇಶ್‌ಕುಮಾರ್, ಕೆ.ಜಿ. ಬೋಪಯ್ಯ, ಎಲ್.ಎ. ರವಿಸುಬ್ರಮಣ್ಯ ಮತ್ತು ಬಿ. ಎನ್. ವಿಜಯ್‌ಕುಮಾರ್** ಇವರುಗಳು – ಕೇಂದ್ರ ಸರ್ಕಾರ ಜಾರಿಗೆ ತಂದಿರುವ ರಿಯಲ್ ಎಸ್ಟೇಟ್ ನಿಯಂತ್ರಣ ಮತ್ತು ಅಭಿವೃದ್ಧಿ ಕಾಯಿದೆ (ರೇರಾ) 2016ನ್ನು ರಾಜ್ಯದಲ್ಲಿ ಜಾರಿಗೆ ತರುವಲ್ಲಿ ಆಗುತ್ತಿರುವ ವಿಳಂಬದಿಂದ ಜನಸಾಮಾನ್ಯರ ಮೇಲೆ ಆಗುತ್ತಿರುವ ಪರಿಣಾಮಗಳ ಕುರಿತು ನೀಡಿರುವ ಸೂಚನೆಯ ಮೇಲೆ ಚರ್ಚೆ.

12. **ಶ್ರೀಯುತರುಗಳಾದ ಅರವಿಂದ ಚಂದ್ರಕಾಂತ ಬೆಲ್ಲದ, ಡಾ|| ಅಶ್ವಥ್‌ನಾರಾಯಣ ಸಿ.ಎನ್. ಮತ್ತು ಆನಂದ ಅಲಿಯಾಸ್ ವಿಶ್ವನಾಥ ಚಂದ್ರಶೇಖರ ಮಾಮನಿ** ಇವರುಗಳು – ಸರ್ಕಾರ ನೀಡಿದ ಆಶ್ವಾಸನೆಯಂತೆ ಹುಬ್ಬಳ್ಳಿ – ಧಾರವಾಡ ಮಹಾನಗರ ಪಾಲಿಕೆಯ ಸುಮಾರು 100 ಕೋಟಿಯಷ್ಟು ಪಿಂಚಣಿ ಹಣ ಈವರೆವಿಗೂ ಮರುಪಾವತಿಯಾಗದೇ ಇರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

## 5. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಜಗದೀಶ್ ಶೆಟ್ಟರ್** ಇವರು – ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲ್ಲೂಕಿನ ಸಹಕಾರಿ ಬ್ಯಾಂಕುಗಳ ದೋರಣೆಯಿಂದ ರೈತರಿಗೆ ಆಗಿರುವ ಅನ್ಯಾಯದ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

2. **ಶ್ರೀಯುತರುಗಳಾದ** ಸಿ.ಎನ್. **ಬಾಲಕೃಷ್ಣ, ಕೆ.ಎಂ. ಶಿವಲಿಂಗೇಗೌಡ ಮತ್ತು ಹೆಚ್.ಡಿ. ರೇವಣ್ಣ** – ಇವರುಗಳು – ಹಾಸನ ಜಿಲ್ಲೆಯಾದ್ಯಂತ ಮುರಾರ್ಜಿ ದೇಸಾಯಿ, ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಕಸ್ತೂರಿ ಬಾ ವಸತಿ ಶಾಲೆಯಲ್ಲಿ ಪದವಿ ಪೂರ್ವ ತರಗತಿಗಳನ್ನು ಆರಂಭಿಸಲು ಅವಶ್ಯಕ ಬೋಧಕ/ಬೋಧಕೇತರ ಸಿಬ್ಬಂದಿಯ ಹುದ್ದೆಗಳೊಂದಿಗೆ ಮಂಜೂರು ಮಾಡುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

3. **ಶ್ರೀ ಜೆ.ಆರ್.ಲೋಬೋ** ಇವರು – ವಿದ್ಯಾರ್ಥಿನಿಲಯಗಳಿಗೆ, ಅನಾಥಾಶ್ರಮದ ಮಕ್ಕಳಿಗೆ, ಕಾನ್ವೆಂಟಿನ ಸಿಸ್ಟರ್‌ಗಳಿಗೆ, ಕುಷ್ಟರೋಗಿಗಳ ಮತ್ತು ಇನ್ನಿತರ ಅನಾಥಾಶ್ರಮಗಳಿಗೆ, ಈಶ್ವರೀಯ ಬ್ರಹ್ಮಕುಮಾರಿ ಸಂಸ್ಥೆಯವರಿಗೆ ಪಡಿತರ ಚೀಟಿಗಳು ಸಿಗದ ಕಾರಣ ಆಗಿರುವ ಸಮಸ್ಯೆಗಳ ಬಗ್ಗೆ ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

4. **ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾಸಾಹೇಬ** ಇವರು – ನಿಪ್ಪಾಣಿ ಮತ ಕ್ಷೇತ್ರದ ಹಲವಾರು ಗ್ರಾಮಗಳಲ್ಲಿನ ಶಾಲೆಗಳನ್ನು ವಿವಿಧ ಭಾಷೆಗಳ ಪ್ರೌಢಶಾಲೆಗಳನ್ನಾಗಿ ಮೇಲ್ದರ್ಜೆಗೇರಿಸುವ ಹಾಗೂ ಹೊಸ ವಿಭಾಗಗಳನ್ನು ಆರಂಭಿಸುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

5. **ಡಾ|| ಕೆ. ಸುಧಾಕರ್** ಇವರು – ಚಿಕ್ಕಾಬಳ್ಳಾಪುರ ತಾಲ್ಲೂಕಿನಲ್ಲಿ ಅಕ್ರಮವಾಗಿ ನಡೆಯುತ್ತಿರುವ ಅಲಂಕಾರಿಕ ಶಿಲಾ ಗಣಿಗಾರಿಕೆಯ ಪ್ರಕರಣಗಳನ್ನು ಸಿ.ಐ.ಡಿ.ಗೆ ವಹಿಸಿ ಸರ್ಕಾರದ ಬೊಕ್ಕಸಕ್ಕೆ ಬರಬೇಕಾಗಿದ್ದ ಕೋಟ್ಯಾಂತರ ಹಣವನ್ನು ಬಡ್ಡಿ ಸಮೇತ ವಸೂಲು ಮಾಡುವುದು ಹಾಗೂ ತಪ್ಪಿತಸ್ತರ ವಿರುದ್ಧ ಕಠಿಣ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

6. **ಡಾ|| ಎ.ಬಿ. ಮಾಲಕರಡ್ಡಿ** ಇವರು – ಯಾದಗಿರಿ ವಿಧಾನಸಭಾ ಕ್ಷೇತ್ರದ ಶಹಾಪುರ ತಾಲ್ಲೂಕಿನ ವಡಗೇರಾವನ್ನು ಹೊಸ ತಾಲ್ಲೂಕು ಕೇಂದ್ರವನ್ನಾಗಿ ಘೋಷಿಸಿರುವಂತೆ ರಚಿಸಲು ಕೈಗೊಂಡಿರುವ ಕ್ರಮಗಳ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

..8

7. **ಶ್ರೀ ಜಗದೀಶ್ ಶೆಟ್ಟರ್** ಇವರು – ಅರಣಾಚಲ ಪ್ರದೇಶ ಮತ್ತು ಇತರೆ ರಾಜ್ಯಗಳಲ್ಲಿ ನೋಂದಣಿಯಾಗಿರುವ ವಾಹನಗಳು ರಾಜ್ಯದಲ್ಲಿ ಅನಧಿಕೃತವಾಗಿ ಸಂಚರಿಸುತ್ತಿದ್ದು ಅವುಗಳನ್ನು ನಿಯಂತ್ರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳ ಬಗ್ಗೆ ಮಾನ್ಯ ಸಾರಿಗೆ ಸಚಿವರ ಗಮನ ಸೆಳೆಯುವುದು.

8. **ಶ್ರೀ ವಿ. ಸುನೀಲ್ ಕುಮಾರ್** ಇವರು – ಆನೆಗಳ ಪುನರ್ವಸತಿ ಕೇಂದ್ರ ಸ್ಥಾಪನೆಗೆ ರಾಜ್ಯ ಸರ್ಕಾರ ಕೈಗೊಂಡಿರುವ ಕ್ರಮಗಳ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

9. **ಶ್ರೀ ಎನ್.ಹೆಚ್. ಕೋನರಡ್ಡಿ** ಇವರು – ಸರ್ಕಾರದ ಭರವಸೆಯಂತೆ ಬೆಂಗಳೂರಿನ ಸರ್ಕಾರಿ ಕಿವುಡ ಮಕ್ಕಳ ಶಾಲೆಯನ್ನು ಸಂಪೂರ್ಣ ವಸತಿ ಶಾಲೆಯನ್ನಾಗಿ ಮಾರ್ಪಡಿಸುವ ಬಗ್ಗೆ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

10. **ಶ್ರೀ ಜೆ. ಆರ್. ಲೋಬೋ** ಇವರು – ಉಚ್ಚ ನ್ಯಾಯಾಲಯದ ಆದೇಶದಂತೆ ಮೆಸ್ಕಾಂ ಸಂಸ್ಥೆಯಲ್ಲಿ ವಯೋಮಿತಿಯನ್ನು ಸಡಿಲಿಸಿ ಹಾಲಿ ಇರುವ ಅರ್ಹ ಗ್ಯಾಂಗ್‌ಮೆನ್‌ಗಳನ್ನು ಲೈನ್‌ಮೆನ್‌ಗಳ ಹುದ್ದೆಗೆ ನೇಮಕಾತಿ ಮಾಡುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

11. **ಶ್ರೀ ಎಂ.ಕೃಷ್ಣಾರೆಡ್ಡಿ** ಇವರು – ಚಿಂತಾಮಣಿ ತಾಲ್ಲೂಕಿನ ಕಾಗತಿ ಪಂಚಾಯಿತಿ ಬುಕ್ಕನಹಳ್ಳಿ ಗ್ರಾಮದಲ್ಲಿ ಅಕ್ರಮ ಮರಳು ದಂಧೆ ಮಾಡುತ್ತಿರುವವರೊಂದಿಗೆ ಅಧಿಕಾರಿಗಳು ಶಾಮೀಲಾಗಿರುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

12. **ಶ್ರೀ ಎನ್. ಚಲುವರಾಯಸ್ವಾಮಿ** ಇವರು – ಮದ್ದೂರು ತಾಲ್ಲೂಕು ಕೊಪ್ಪ ಹೋಬಳಿಯ ಮರಳಿಗ ಗ್ರಾಮದಲ್ಲಿ ಸರ್ಕಾರಿ ಪ್ರೌಢಶಾಲೆ ಕಟ್ಟಡ ಕಾಮಗಾರಿ ಸ್ಥಗಿತಗೊಂಡಿದ್ದು, ಅದನ್ನು ಪೂರ್ಣಗೊಳಿಸಲು ಅವಶ್ಯವಿರುವ ಅನುದಾನವನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

13. **ಶ್ರೀ ಶಿವಾನಂದ ಎಸ್. ಪಾಟೀಲ** ಇವರು – ನೋಟುಗಳ ಅಮಾನ್ಯೀಕರಣದಿಂದ ರಾಜ್ಯದ ರೈತರುಗಳಿಗೆ ಆರ್ಥಿಕ ಸಹಾಯ ನೀಡಲು ಆಗುತ್ತಿರುವ ತೊಂದರೆಗಳ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

14. **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಸಿ.ಎನ್. ಬಾಲಕೃಷ್ಣ ಮತ್ತು ಕೆ.ಎಂ. ಶಿವಲಿಂಗೇಗೌಡ** ಇವರುಗಳು – ಹಾಸನ ಜಿಲ್ಲೆಯ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಗ್ರಾಮೀಣ ಪ್ರದೇಶಗಳಲ್ಲಿ ಸಮುದಾಯ ಭವನಗಳ ನಿರ್ಮಾಣ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ಮಾನ್ಯ ಯೋಜನೆ ಮತ್ತು ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಗಮನ ಸೆಳೆಯುವುದು.

..9

15. **ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ ಮತ್ತು ಸಿ.ಎನ್. ಬಾಲಕೃಷ್ಣ** ಇವರುಗಳು – ಹಾಸನ ಜಿಲ್ಲೆ ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರೌಢಶಾಲೆಗಳಿಗೆ ಅವಶ್ಯಕವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

16. **ಶ್ರೀಯುತರುಗಳಾದ ಹೆಚ್.ಎಸ್. ಪ್ರಕಾಶ್, ಹೆಚ್.ಡಿ. ರೇವಣ್ಣ ಮತ್ತು ಸಿ.ಎನ್. ಬಾಲಕೃಷ್ಣ** ಇವರುಗಳು – ಹಾಸನ ಜಿಲ್ಲೆಯಲ್ಲಿನ ಮಹಿಳಾ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಬೋಧಕ/ಬೋಧಕೇತರ ಸಿಬ್ಬಂದಿಗಳನ್ನು ನೇಮಿಸುವುದು ಹಾಗೂ ಕಟ್ಟಡ ನಿರ್ಮಾಣಕ್ಕಾಗಿ ಅವಶ್ಯವಿರುವ ಅನುದಾನವನ್ನು ಬಿಡುಗಡೆಗೊಳಿಸುವುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

17. **ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾಸಾಹೇಬ** ಇವರು – ನಿಪ್ಪಾಣಿಯಲ್ಲಿ ಜೆ.ಎಮ್.ಎಫ್.ಸಿ. ನ್ಯಾಯಾಲಯವನ್ನು ಸ್ಥಾಪಿಸುವ ಬಗ್ಗೆ ಮಾನ್ಯ ಕಾನೂನು ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿವರ ಗಮನ ಸೆಳೆಯುವುದು.

18. **ಶ್ರೀ ಕೆ.ಜಿ. ಬೋಪಯ್ಯ** ಇವರು – ಕೊಡಗು ಜಿಲ್ಲೆಯ ಅಬಕಾರಿ ಇಲಾಖಾ ಕಛೇರಿಯನ್ನು ಕಳಕೇರಿ ನಿಡುಗಣೆ ಗ್ರಾಮದಲ್ಲಿನ ಕಟ್ಟಡಕ್ಕೆ ಸ್ಥಳಾಂತರಿಸಿ ಉಳಿದ ಕಾಮಗಾರಿಗಳನ್ನು ಪೂರ್ಣಗೊಳಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

19. **ಶ್ರೀ ಜಗದೀಶ್ ಶೆಟ್ಟರ್** ಇವರು – ಶ್ರೀಮತಿ ವಾಣಿ ನಾಯ್ಕ ರವರು ತಮ್ಮ ಪತಿಯ ವಿರುದ್ಧ ಅತ್ತಿಬೆಲೆ ಪೊಲೀಸ್ ಠಾಣೆಯಲ್ಲಿ ವರದಕ್ಷಿಣೆ ಕಿರುಕುಳ, ಮಾನಸಿಕ ಮತ್ತು ದೈಹಿಕ ಹಿಂಸೆಯ ಸಂಬಂಧ ನೀಡಿರುವ ದೂರಿಗೆ ಈವರೆವಿಗೂ ಆರೋಪ ಪಟ್ಟಿ ಸಲ್ಲಿಕೆಯಾಗದೇ ಇರಲು ಕಾರಣ ಕರ್ತರಾದವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

20. **ಶ್ರೀ ಜಗದೀಶ್ ಶೆಟ್ಟರ್ ಇವರು – ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಸರ್ಕಾರಿ ಉದ್ಯೋಗದಲ್ಲಿ ಅಂಗವಿಕಲರಿಗೆ ಶೇ.3 ರಷ್ಟು ಬಡ್ತಿಯಲ್ಲಿ ಮೀಸಲಾತಿ ನೀಡುವ ಬಗ್ಗೆ ಮಾನ್ಯ** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು

21. **ಶ್ರೀ ಪಿಳ್ಳಮುನಿಶಾಮಪ್ಪ** ಇವರು – ದೇವನಹಳ್ಳಿ ತಾಲ್ಲೂಕಿನ ಕೆಲವು ಗ್ರಾಮ ಪಂಚಾಯಿತಿಗಳಿಗೆ ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರಾಧಿಕಾರವು ತೆರಿಗೆ ಮೊತ್ತ ಪಾವತಿಸುವಂತೆ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

. . 10

22.**ಶ್ರೀ ಎಸ್.ಟಿ. ಸೋಮಶೇಖರ್** ಇವರು – ಉಚ್ಚ ನ್ಯಾಯಾಲಯದ ಆದೇಶದಂತೆ ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ ಬಿ.ಎಂ.ಕಾವಲ್ ಸರ್ವೆ ನಂ. 132 ರಲ್ಲಿ 18 ಎಕರೆ ಜಾಗವನ್ನು ಆರ್.ಯು.ಸಿ. ಅಡಿಯಲ್ಲಿ ಮಂಜೂರಾಗಿ ರದ್ದುಪಡಿಸಿರುವ ಸರ್ಕಾರಿ ಜಮೀನನ್ನು ಬಡ ನಿವೇಶನ ರಹಿತರಿಗೆ ಆಶ್ರಯ ಯೋಜನೆಯಡಿ ಕಾಯ್ದಿರಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

23.**ಶ್ರೀ ಜಿ.ಹೆಚ್. ಶ್ರೀನಿವಾಸ್** ಇವರು – ತರೀಕೆರೆ ಪಟ್ಟಣಕ್ಕೆ ಕುಡಿಯುವ ನೀರನ್ನು ಪೂರೈಸಲಾಗುತ್ತಿದ್ದ ಮಾನಸೀಕೆರೆಗೆ ಭದ್ರಾ ಬಲದಂಡೆಯ ಮೂಲಕ ನೀರು ಹರಿಸುವುದನ್ನು ಸ್ಥಗಿತಗೊಳಿಸಿರುವುದರಿಂದ ಉಂಟಾಗಿರುವ ಸಮಸ್ಯೆಯ ಬಗ್ಗೆ ಮಾನ್ಯ ನಗರಾಭಿವೃದ್ಧಿ ಮತ್ತು ಹಜ್ ಸಚಿವರ ಗಮನ ಸೆಳೆಯವುದು.

24.**ಶ್ರೀ ವೈ.ಎ. ನಾರಾಯಣಸ್ವಾಮಿ** ಇವರು – ಹೆಬ್ಬಾಳ ವ್ಯಾಲಿಯಲ್ಲಿ ಮಳೆಗಾಲದಲ್ಲಿ ಹಲವಾರು ಬಡಾವಣೆಗಳು ಜಲಾವೃತವಾಗುತ್ತಿರುವುದನ್ನು ತಪ್ಪಿಸಲು ಹಾಲಿ ಇರುವ 60 MLD STP ಯನ್ನು 120 MLD ಸಾಮರ್ಥ್ಯಕ್ಕೇರಿಸುವ ಬಗ್ಗೆ ಮಾನ್ಯ ಬೆಂಗಳೂರು ಅಭಿವೃದ್ಧಿ ಮತ್ತು ನಗರ ಯೋಜನಾ ಸಚಿವರ ಗಮನ ಸೆಳೆಯುವುದು.

25.**ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ ಮತ್ತು ಸಿ.ಎನ್. ಬಾಲಕೃಷ್ಣ** ಇವರುಗಳು – ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಹಲವಾರು ಗ್ರಾಮಗಳಲ್ಲಿನ ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡುವುದು ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

26.**ಶ್ರೀಯುತರುಗಳಾದ ಸಿ.ಎನ್. ಬಾಲಕೃಷ್ಣ, ಹೆಚ್.ಎಸ್. ಪ್ರಕಾಶ್, ಹೆಚ್.ಡಿ. ರೇವಣ್ಣ ಮತ್ತು ಹೆಚ್.ಕೆ. ಕುಮಾರಸ್ವಾಮಿ** ಇವರುಗಳು – ಹಾಸನ ಜಿಲ್ಲೆಗೆ 2017-18ನೇ ಸಾಲಿನ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ರೂ. 2.00 ಕೋಟಿಗಳ ಅನುದಾನವನ್ನು ಬಿಡುಗಡೆಗೊಳಿಸುವ ಬಗ್ಗೆ ಮಾನ್ಯ ಯೋಜನೆ ಮತ್ತು ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಗಮನ ಸೆಳೆಯುವುದು.

27.**ಶ್ರೀಯುತರುಗಳಾದ ಕೆ.ಎಂ. ಶಿವಲಿಂಗೇಗೌಡ, ಸಿ.ಎನ್. ಬಾಲಕೃಷ್ಣ, ಮತ್ತು ಹೆಚ್.ಡಿ. ರೇವಣ್ಣ** ಇವರುಗಳು – ಹಾಸನ ಜಿಲ್ಲೆಯ 07 ತಾಲ್ಲೂಕುಗಳ ಸಾರ್ವಜನಿಕ ಆಸ್ಪತ್ರೆಗಳಿಗೆ ಅವಶ್ಯಕವಿರುವ ವೈದ್ಯರು, ಶುಶ್ರೂಷಕರು, ಆಡಳಿತ ಸಿಬ್ಬಂದಿ, ನೇತ್ರತಜ್ಞರು ಮತ್ತು ರೇಡಿಯಾಲಜಿಸ್ಟ್ ಗಳನ್ನು ನೇಮಕ ಮಾಡುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

. . 11

28.**ಡಾ|| ನಾರಾಯಣ ಗೌಡ** ಇವರು – ಅಕ್ರಮ ಕ್ರಷರ್‌ಗಳನ್ನು ನಿಯಂತ್ರಿಸಲು ರಾಜ್ಯದಲ್ಲಿ ಇತರೆಡೆಗಳಲ್ಲಿ ಅನುಮತಿಸಿರುವಂತೆ ಮಂಡ್ಯ ಜಿಲ್ಲೆಯಲ್ಲಿಯೂ ಕಾನೂನಾತ್ಮಕವಾಗಿ ಕ್ರಷರ್ ನಡೆಸುವವರಿಗೆ ನಿರಪೇಕ್ಷಣಾ ಪತ್ರವನ್ನು ನೀಡುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

29.**ಶ್ರೀ ಆನಂದ ಅಲಿಯಾಸ್ ವಿಶ್ವನಾಥ ಚಂದ್ರಶೇಖರ ಮಾಮನಿ** ಇವರು – ಅನ್ನ ಭಾಗ್ಯ ಯೋಜನೆಗೆ ಸಂಬಂಧಿಸಿದಂತೆ ಅಕ್ಕಿಯನ್ನು ಕಾಳಸಂತೆಯಲ್ಲಿ ಮಾರಾಟ ಮಾಡುತ್ತಿರುವವರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಅಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

30.**ಶ್ರೀಯುತರುಗಳಾದ ನಾರಾಯಣ ಗೌಡ ಮತ್ತು ಸಾ.ರಾ. ಮಹೇಶ್** ಇವರುಗಳು – ಹಾಸನ ಜಿಲ್ಲೆಯ ಪಡುವಲಹಿಪ್ಪೆ ಗ್ರಾಮದ ಶ್ರೀ ಹೆಚ್.ಡಿ. ದೇವೇಗೌಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಅಪಹರಣಗೊಂಡಿರುವ ಎಂ.ಕಾಂ ವಿದ್ಯಾರ್ಥಿನಿಯನ್ನು ರಕ್ಷಿಸಿ, ತಪ್ಪಿತಸ್ಥರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

31.**ಶ್ರೀ ಪಿಳ್ಳ ಮುನಿಶಾಮಪ್ಪ** ಇವರು – ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ತೂಬಗೆರೆ ಹೋಬಳಿಯಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದವರು ನಿರ್ಮಾಣ ಮಾಡುತ್ತಿರುವ ಉಗ್ರಾಣಗಳ ಕಟ್ಟಡದ ಕಳಪೆ ಕಾಮಗಾರಿಗಳಿಗೆ ಕಾರಣರಾಗಿರುವವರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

32.**ಶ್ರೀ ವೈ.ಎ. ನಾರಾಯಣಸ್ವಾಮಿ** ಇವರು – ನಗರ ಪ್ರದೇಶಗಳಲ್ಲಿ ಗಂಗಾ ಕಲ್ಯಾಣ ಯೋಜನೆ, ಭೂ ಒಡೆತನ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗದ ಕಾರಣ ಇದಕ್ಕೆ ಪರ್ಯಾಯವಾಗಿ ಇತರೆ ಯೋಜನೆಗಳನ್ನು ನಗರ ಪ್ರದೇಶಗಳಿಗಾಗಿ ಪ್ರಾರಂಭಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

33.**ಶ್ರೀ ಕೆ.ಎಸ್. ಮಂಜುನಾಥಗೌಡ** ಇವರು – ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕಿನ ಮಿಂಡಹಳ್ಳಿ ಮತ್ತು ಕರಿನಾಯಕನ ಹಳ್ಳಿಗಳಲ್ಲಿ ಕೈಗಾರಿಕೆಗಳ ಸ್ಥಾಪಿಸುವ ಸಲುವಾಗಿ ಕೆ.ಐ.ಎ.ಡಿ.ಬಿ. ಯು ಜಮೀನುಗಳನ್ನು ಸ್ವಾಧೀನ ಪಡಿಸಿಕೊಂಡಿದ್ದು 2ನೇ ಹಂತದ ಡಿನೋಟಿಫಿಕೇಷನ್ ಮಾಡವುದರಲ್ಲಿ ವಿಳಂಬವಾಗಿರುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಮೂಲಭೂತ ಸೌಲಭ್ಯ ಅಭಿವೃದ್ಧಿ ಸಚಿವರ ಗಮನ ಸೆಳೆಯುವುದು.

34.**ಶ್ರೀ ವಿಜಯಾನಂದ ಎಸ್. ಕಾಶಪ್ಪನವರ** ಇವರು – ಹುನಗುಂದದಿಂದ ತಾಳಿಕೋಟೆಯವರೆಗಿನ ರಸ್ತೆಯನ್ನು ಸುಧಾರಣೆ ಮಾಡಲು ಟೆಂಡರ್ ಆಗಿದ್ದರೂ ಸಹ ಇದುವರೆವಿಗೆ ಕೆಲಸ ಪ್ರಾರಂಭವಾಗದೇ ತೊಂದರೆಯಾಗಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

**. . 12**

35.**ಶ್ರೀ ಕೆ.ಬಿ. ಪ್ರಸನ್ನಕುಮಾರ್** ಇವರು – ಶಿವಮೊಗ್ಗದ ಗಾಜನೂರು ಡ್ಯಾಂನ ಪ್ರದೇಶವನ್ನು ಕೆ.ಆರ್.ಎಸ್. ಮಾದರಿಯಲ್ಲಿ ಪ್ರವಾಸಿ ತಾಣವಾಗಿ ಅಭಿವೃದ್ಧಿಪಡಿಸುವ ಬಗ್ಗೆ ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯಮ ರಾಜ್ಯ ಸಚಿವರ ಗಮನ ಸೆಳೆಯುವುದು.

36.**ಶ್ರೀ ವಿ. ಸುನೀಲ್‌ಕುಮಾರ್** ಇವರು – ಮಂಗಳೂರು ಮತ್ತು ಉಡುಪಿ ಜಿಲ್ಲೆಯ ಗಡಿ ಭಾಗದಲ್ಲಿರುವ ಇನ್ನಾ, ಪಟ್ಟೇಕ್ರಾಸ್ ಗ್ರಾಮಗಳಲ್ಲಿ ಸತತವಾಗಿ ಅಕ್ರಮ ಮರಳು ಗಣಿಗಾರಿಕೆ ನಡೆಯುತ್ತಿದ್ದರೂ ಇಲಾಖಾ ಅಧಿಕಾರಿಗಳು ಯಾವುದೇ ಕ್ರಮ ಕೈಗೊಳ್ಳದಿರುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

37.**ಶ್ರೀ ಕ್ಯಾತಸಂದ್ರ ಎನ್. ರಾಜಣ್ಣ** ಇವರು – ಮಧುಗಿರಿ ತಾಲ್ಲೂಕಿನಲ್ಲಿ ಅರ್ಹರಿಗೆ ಬಿ.ಪಿ.ಎಲ್. ಕಾರ್ಡ್ ವಿತರಣೆ, ಬಿ.ಪಿ.ಎಲ್ ಕಾರ್ಡ್‌ಗೆ ಕುಟುಂಬ ಸದಸ್ಯರುಗಳ ಹೆಸರನ್ನು ಸೇರ್ಪಡೆ ಮತ್ತು ತೆಗೆಯುವ ಕಾರ್ಯ ವಿಳಂಬವಾಗುತ್ತಿರುವುದರಿಂದ ತೊಂದರೆಯುಂಟಾಗುತ್ತಿರುವ ಬಗ್ಗೆ ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

38.**ಶ್ರೀಯುತರುಗಳಾದ ಡಿ. ಸುಧಾಕರ್, ಬಿ.ಜಿ. ಗೋವಿಂದಪ್ಪ ಮತ್ತು ಟಿ. ರಘುಮೂರ್ತಿ** ಇವರುಗಳು – ರಾಜ್ಯದಲ್ಲಿ ಪವನ ವಿದ್ಯುತ್ ಉತ್ಪಾದನಾ ಘಟಕಗಳ ಸ್ಥಾಪನೆಗೆ ಅನುಮತಿ ಪಡೆದಿರುವ ಹೂಡಿಕೆದಾರರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

39.**ಶ್ರೀ ಜೆ.ಆರ್. ಲೋಬೋ** ಇವರು – ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯವರಿಗೆ ಬಡ್ತಿ ನೀಡಲು ಶಿಕ್ಷಣ ಇಲಾಖೆ ಅನುಮತಿ ನೀಡುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

40.**ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ** ಇವರು – ರಾಜ್ಯದಲ್ಲಿ ಹಿಮೋಫಿಲಿಯಾ ರೋಗ ಪೀಡಿತರಿಗೆ ಸೂಕ್ತವಾದ ಚಿಕಿತ್ಸೆಯನ್ನು ಉಚಿತವಾಗಿ ವರ್ಷ ಪೂರ್ತಿ ಒದಗಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

41.**ಶ್ರೀ ಆನಂದ ಅಲಿಯಾಸ್ ವಿಶ್ವನಾಥ ಚಂದ್ರಶೇಖರ ಮಾಮನಿ** ಇವರು – ಸವದತ್ತಿ ತಾಲೂಕಿನಲ್ಲಿ ಕರ್ನಾಟಕ ನೀರಾವರಿ ನಿಗಮದ ವ್ಯಾಪ್ತಿಯಲ್ಲಿ ಖಾಲಿ ಇರುವ ತಾಂತ್ರಿಕ ಹುದ್ದೆಗಳ ಬಗ್ಗೆ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

42.**ಶ್ರೀ ಎಂ.ಪಿ. ರವೀಂದ್ರ** ಇವರು – ಹರಪನಹಳ್ಳಿ ತಾಲ್ಲೂಕನ್ನು ಪುನಃ ಬಳ್ಳಾರಿ ಜಿಲ್ಲೆಗೆ ಸೇರಿಸುವುದು ಅಥಾವ ಹೈದರಾಬಾದ್ – ಕರ್ನಾಟಕ 371 ವಿಶೇಷ ಸ್ಥಾನಮಾನ ಹೊಂದಿರುವ ತಾಲ್ಲೂಕುಗಳ ಪಟ್ಟಿಗೆ ಸೇರಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

43.**ಶ್ರೀ ಬಿ.ಸುರೇಶ್‌ಗೌಡ** ಇವರು –ತುಮಕೂರು ತಾಲ್ಲೂಕಿನಾದ್ಯಂತ ಬರಗಾಲದ ಪ್ರಯುಕ್ತ ಕುಡಿಯುವ ನೀರಿಗಾಗಿ ಕೊರೆದಿರುವ ಕೊಳವೆ ಬಾವಿಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

44.**ಶ್ರೀ ಬಿ.ಸುರೇಶ್‌ಗೌಡ** ಇವರು – ರಾಜ್ಯದ್ಯಾಂತ ಪ್ಲಾಸ್ಟಿಕ್ ನಿಷೇದ ಜಾರಿಗೊಳಿಸಲಾಗಿದ್ದರೂ ಸಹ ಎಲ್ಲಾ ಜಿಲ್ಲೆಗಳಲ್ಲಿಯೂ ಪ್ಲಾಸ್ಟಿಕ್ ಫ್ಲೆಕ್ಸ್‌ಗಳ ಹಾವಳಿ ಹೆಚ್ಚಾಗಿದ್ದು ಪರಿಸರಕ್ಕೆ ಹಾನಿ ಆಗುತ್ತಿರುವುದನ್ನು ತಪ್ಪಿಸಲು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

45.**ಶ್ರೀ ಬಿ. ಸುರೇಶ್‌ಗೌಡ** ಇವರು – ತುಮಕೂರು ಜಿಲ್ಲೆಯ ಹೇಮಾವತಿ ಶಾಖಾ ನಾಲೆಯಲ್ಲಿ ಹರಿಯುವ ನೀರನ್ನು ಆದ್ಯತೆ ಮೇರೆಗೆ ಕುಡಿಯುವ ನೀರಿನ ಯೋಜನೆಗಳಿಗೆ ನೀರನ್ನು ಹರಿಸುವ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

46.**ಶ್ರೀ ಮನೋಹರ್ ಹೆಚ್. ತಾಹಶೀಲ್ದಾರ್** ಇವರು – ಉದ್ಯೋಗ ಮತ್ತು ಇತರೆ ಸೌಲಭ್ಯಗಳಿಗೂ ಅನುಕೂಲವಾಗುವಂತೆ ಬಲಿಜ ಜನಾಂಗಕ್ಕೆ ಪ್ರವರ್ಗ 3ಎ ಬದಲಾಗಿ 2ಎ ರಲ್ಲಿ ಪರಿಪೂರ್ಣ ಮೀಸಲಾತಿ ನೀಡುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಮತ್ತು ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

47.**ಶ್ರೀ ಆನಂದ ಅಲಿಯಾಸ್ ವಿಶ್ವನಾಥ ಚಂದ್ರಶೇಖರ ಮಾಮನಿ** ಇವರು – ಬೆಳಗಾವಿ ಜಿಲ್ಲೆ ಸವದತ್ತಿ ಯಲ್ಲಮ್ಮ ಮತಕ್ಷೇತ್ರದ ಹಂಚಿನಾಳ ಗ್ರಾಮದಲ್ಲಿ ಸಂಭವಿಸಿದ ಬೆಂಕಿ ಅವಘಡಕ್ಕೆ ಸಿಲುಕಿದ 72 ಸಂತ್ರಸ್ಥ ಕುಟುಂಬಗಳಿಗೂ ಸಮಾನವಾಗಿ ಪರಿಹಾರ ವಿತರಿಸದೇ ಇರುವುದನ್ನು ಸರಿಪಡಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

48.**ಶ್ರೀಮತಿ ಶಾರದಾ ಪೂರ್ಯನಾಯ್ಕ** ಇವರು – ಶಿವಮೊಗ್ಗ ತಾಲ್ಲೂಕು ತ್ಯಾವರೆಕೊಪ್ಪ ಗ್ರಾಮದ ಬಿಕ್ಷುಕರ ನಿರಾಶ್ರಿತ ಕಾಲೋನಿಯ ಕೆರೆಗೆ ತುಂಗಾ ಏತ ನೀರಾವರಿ ಯೋಜನೆ ಗೌಡನಕೆರೆಯಿಂದ ನೀರನ್ನು ಒದಗಿಸುವ ಕಾಮಗಾರಿ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

49.**ಶ್ರೀ ಸಿ.ಎನ್. ಬಾಲಕೃಷ್ಣ** ಇವರು – ಶ್ರವಣಗೆಳಗೊಳ ವ್ಯಾಪ್ತಿಯಲ್ಲಿ ಅಕ್ರಮ ಸಕ್ರಮ ಯೋಜನೆಯಡಿ ವಿದ್ಯುತ್ ಸಂಪರ್ಕಕ್ಕಾಗಿ ಹಣ ಸಂದಾಯ ಮಾಡಿರುವ ರೈತರಿಗೆ ಅಧಿಕೃತವಾಗಿ ವಿದ್ಯುತ್ ಸಂಪರ್ಕ ಕಲ್ಪಿಸುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

. . 14

**50.ಶ್ರೀ ಹೆಚ್.ಕೆ. ಕುಮಾರಸ್ವಾಮಿ** ಇವರು – ಆಲೂರು ತಾಲ್ಲೂಕಿನ ಹೇಮಾವತಿ ಜಲಾಶಯ ಹಿನ್ನೀರಿಗೆ ಶಿರಗವಾರ – ಕೊಡ್ಲಿಪೇಟೆ ಸಂಪರ್ಕಿಸುವ ರಸ್ತೆಗೆ ಅಡ್ಡಲಾಗಿ ಸೇತುವೆ ನಿರ್ಮಿಸುವ ಕಾಮಗಾರಿ ಪೂರ್ಣಗೊಳ್ಳದಿರುವ ಬಗ್ಗೆ ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

## 6. ಅರ್ಧ ಗಂಟೆ ಕಾಲಾವಧಿ ಚರ್ಚೆ

1. **ಶ್ರೀ ಹೆಚ್. ಎಸ್. ಪ್ರಕಾಶ್ ಮತ್ತು ಶ್ರೀ ಹೆಚ್.ಡಿ. ರೇವಣ್ಣ** ಇವರುಗಳು – "ಕೆ.ಐ.ಎ.ಡಿ.ಬಿ. ವತಿಯಿಂದ ಹಾಸನ ಜಿಲ್ಲೆಯಲ್ಲಿ ಎಸ್.ಇ. ಝಡ್ ಯೋಜನೆಯಡಿ ವಿವಿಧ ಕೈಗಾರಿಕಾ ಉದ್ಯಮಗಳನ್ನು ಸ್ಥಾಪಿಸಲು ಮಂಜೂರಾದ ಭೂಮಿಯಲ್ಲಿ ನಿಯಮಾವಳಿಗಳ ರೀತ್ಯ ಉದ್ಯಮಗಳನ್ನು ಸ್ಥಾಪಿಸದೆ ಇರುವವರ ವಿರುದ್ಧ ಕ್ರಮ ಕೈಗೊಳ್ಳುವುದರ ಬಗ್ಗೆ" ದಿನಾಂಕ: 06.06.2017ರ ಗಮನ ಸೆಳೆಯುವ ಸೂಚನೆಯಲ್ಲಿ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

2. **ಶ್ರೀ ಜೆ.ಆರ್. ಲೋಬೋ** ಇವರು – "ರಾಜ್ಯದ ಕರಾವಳಿ ಮತ್ತು ಮಲೆನಾಡು ಜಿಲ್ಲೆಗಳಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯು ತಂದಿರುವ ನಮೂನೆ–9 ಮತ್ತು 11 ರಿಂದ ಆಗುತ್ತಿರುವ ತೊಂದರೆಯನ್ನು ನೀಗಿಸುವ ಬಗ್ಗೆ" ದಿನಾಂಕ: 06.06.2017ರ ಗಮನ ಸೆಳೆಯುವ ಸೂಚನೆಯಲ್ಲಿ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

3. **ಶ್ರೀ ಹೆಚ್.ಕೆ. ಕುಮಾರಸ್ವಾಮಿ** ಇವರು – "ದಿನಾಂಕ:04.06.2017ರಂದು ಸಕಲೇಶಪುರ ತಾಲ್ಲೂಕಿನಲ್ಲಿ ಆನೆ ದಾಳಿಯಿಂದ ರೈತನೋರ್ವ ಸಾವನ್ನಪ್ಪಿದ್ದು ಸೇರಿದಂತೆ, ಆನೆ ದಾಳಿಯಿಂದ ಪ್ರಾಣ, ಆಸ್ತಿ, ಹಾನಿ ತಡೆಯಲು ಆನೆ ಕಾರಿಡಾರ್ ಯೋಜನೆ ಮತ್ತು ಇತರೆ ಪರಿಹಾರ ನೀಡುವ ಬಗ್ಗೆ" ದಿನಾಂಕ: 06.06.2017ರಂದು ಶೂನ್ಯವೇಳೆಯಲ್ಲಿ ಪ್ರಸ್ತಾಪಿಸಿದ ವಿಷಯ ಹಾಗೂ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

4. **ಶ್ರೀ ಮೋಹಿಯುದ್ದಿನ್ ಬಾವಾ ಬಿ.ಎ. ಇವರು** – "ಬಿ.ಪಿ.ಎಲ್. ಪಡಿತರ ಚೀಟಿ ವಿತರಣೆ ಕುರಿತು" ದಿನಾಂಕ: 08.06.2017ರಂದು ಸದನದಲ್ಲಿ ಉತ್ತರಿಸುವ 4ನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 55 (994)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

5. **ಶ್ರೀ ವಿ. ಸುನೀಲ್ ಕುಮಾರ್** ಇವರು – "ರಾಜ್ಯದಲ್ಲಿ ಸರ್ಕಾರಿ ಜಮೀನುಗಳನ್ನು ಅವೈಜ್ಞಾನಿಕವಾಗಿ ಡೀಮ್ಡ್ ಫಾರೆಸ್ಟ್ ಪಟ್ಟಿಗೆ ಸೇರಿಸಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವ ಬಗ್ಗೆ" ದಿನಾಂಕ: 13.06.2017ರ ಗಮನ ಸೆಳೆಯುವ ಸೂಚನೆಯಲ್ಲಿ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

6. **ಡಾ|| ಶಿವರಾಜ್ ಪಾಟೀಲ್ ಎಸ್**. ಇವರು – "ರಾಯಚೂರು ನಗರದಲ್ಲಿ 24*7 ಕುಡಿಯುವ ನೀರು ಸರಬರಾಜು ಯೋಜನೆ ಕಾಮಗಾರಿಯನ್ನು ಪೂರ್ಣಗೊಳಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ" ದಿನಾಂಕ: 13.06.2017ರಂದು ಸದನದಲ್ಲಿ ಉತ್ತರಿಸುವ 4ನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 98 (1583)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm